

# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 09-03-2021 ಪ್ರಶ್ನೆ ಸಂಖ್ಯೆ : 663(876)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಅರವಿಂದ ಕುಮಾರ ಅರಳಿ(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 09-03-2021

ಉತ್ತರಿಸುವ ಸಚಿವರು: ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

ವಿಷಯ : ಬೀದರ್ ಜಿಲ್ಲೆಯಲ್ಲಿ ಕೈಗಾರಿಕೆಗಳ ಸ್ಥಾಪನೆಗೆ ಜಮೀನು ನೀಡಿರುವ ಬಗ್ಗೆ

(ಅ) ಕಳೆದ ಎರಡು ವರ್ಷ ಬೀದರ್ ಜಿಲ್ಲೆಯಲ್ಲಿ ಕೈಗಾರಿಕೆಗಳನ್ನು ಸ್ಥಾಪನೆ ಮಾಡಲು ಸರ್ಕಾರದಿಂದ ಯಾವ ಯಾವ ಕಂಪನಿಗಳಿಗೆ /ಕಾರ್ಖಾನೆಗಳಿಗೆ/ಸಂಸ್ಥೆಗಳಿಗೆ ಎಷ್ಟೆಷ್ಟು ಎಕರೆ ಜಮೀನು ನೀಡಲಾಗಿದೆ; (ಕಂಪನಿ ಮಾಲೀಕರು/ಕಾರ್ಖಾನೆ/ಸಂಸ್ಥೆ ಹೆಸರು ವಿಳಾಸದೊಂದಿಗೆ ತಾಲ್ಲೂಕುವಾರು ವಿವರ ನೀಡುವುದು)

(ಆ) ಈ ಕಂಪನಿಗಳಿಗೆ ಕೈಗಾರಿಕೆ ಸ್ಥಾಪಿಸುವ ಉದ್ದೇಶಕ್ಕೆ ರಿಯಾಯಿತಿ ದರದಲ್ಲಿ ಯಾವ ಯಾವ ಸೌಲಭ್ಯಗಳನ್ನು ಸರ್ಕಾರ ಒದಗಿಸಿಕೊಟ್ಟಿದೆ; (ಸಂಪೂರ್ಣ ಮಾಹಿತಿ ನೀಡುವುದು)

(ಇ) ಕೈಗಾರಿಕೆಗಳನ್ನು ಸ್ಥಾಪಿಸಲು ಸರ್ಕಾರದಿಂದ ನೀಡಿರುವ ಜಮೀನನ್ನು ಸಂಪೂರ್ಣವಾಗಿ ಸದರಿ ಉದ್ದೇಶಕ್ಕಾಗಿ ಬಳಸಿಕೊಳ್ಳಲಾಗಿದೆಯೇ; (ವಿವರ ನೀಡುವುದು)

(ಈ) ಕೈಗಾರಿಕೆಗಳನ್ನು ಸ್ಥಾಪಿಸಲು ಕೊಟ್ಟಿರುವ ಜಮೀನನ್ನು ಬಳಸಿಕೊಳ್ಳದಿರುವ ಸಂಸ್ಥೆಗಳೆಷ್ಟು; ಅಂತಹ ಸಂಸ್ಥೆಗಳಿಗೆ ಎಷ್ಟು ಎಕರೆ ಜಮೀನನ್ನು ನೀಡಿದೆ ಮತ್ತು ಇತರೆ ರಿಯಾಯಿತಿ ಸೌಲಭ್ಯಗಳನ್ನು ನೀಡಲಾಗಿದೆ ಎಂಬ ಬಗ್ಗೆ ಪೂರ್ಣ ಮಾಹಿತಿ ನೀಡುವುದು;

(ಉ) ಕಳೆದ ಎರಡು ವರ್ಷಗಳಲ್ಲಿ ಜಿಲ್ಲೆಯಲ್ಲಿ ಈಗಾಗಲೇ ಸ್ಥಾಪನೆಗೊಂಡಿರುವ ಕಂಪನಿ/ಕಾರ್ಖಾನೆ/ಸಂಸ್ಥೆಗಳಿಂದ ಎಷ್ಟು ಪ್ರಮಾಣದಲ್ಲಿ ಉದ್ಯೋಗಗಳು ಸೃಷ್ಠಿಯಾಗಿವೆ ಮತ್ತು ಈ ಉದ್ಯೋಗಗಳಲ್ಲಿ ಸ್ಥಳೀಯರಿಗೆ ನೀಡಿರುವ ಉದ್ಯೋಗಿಗಳ ಸಂಖ್ಯೆ ಎಷ್ಟು? (ಸಂಪೂರ್ಣವಾದ ವಿವರವನ್ನು ಹಾಗೂ ತಾಲ್ಲೂಕುವಾರು ಮಾಹಿತಿಯನ್ನು ನೀಡುವುದು)